## ಕರ್ನಾಟಕ ವಿಧಾನ ಪರಿಷತ್ತು

| | |
|---|---|
| ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ | 1067 |
| ಸದಸ್ಯರ ಹೆಸರು | ಶ್ರೀ ಗೋವಿಂದ ರಾಜು<br>(ವಿಧಾನ ಸಭೆಯಿಂದ ಚುನಾಯಿತರಾದವರು) |
| ಉತ್ತರಿಸುವ ದಿನಾಂಕ | 12.03.2021 |
| ಉತ್ತರಿಸುವ ಸಚಿವರು | ಕೃಷಿ ಸಚಿವರು |

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಕೋಲಾರ ಜಿಲ್ಲೆಯಲ್ಲಿ ವ್ಯವಸಾಯಕ್ಕೆ ಯೋಗ್ಯವಾದ ಜಮೀನಿನ ವಿಸ್ತೀರ್ಣವೆಷ್ಟು; (ಹೆಕ್ಟೇರ್‌ವಾರು ಹಾಗೂ ತಾಲ್ಲೂಕುವಾರು ವಿವರ ನೀಡುವುದು) | ಕೋಲಾರ ಜಿಲ್ಲೆಯಲ್ಲಿ ತಾಲ್ಲೂಕುವಾರು ವ್ಯವಸಾಯಕ್ಕೆ ಯೋಗ್ಯವಾದ ಜಮೀನಿನ ವಿಸ್ತೀರ್ಣದ ವಿವರಗಳು ಈ ಕೆಳಕಂಡಂತಿವೆ. |

(ವಿಸ್ತೀರ್ಣ ಹೆಕ್ಟೇರ್ ಗಳಲ್ಲಿ)

| ಕ್ರ.ಸಂ. | ತಾಲ್ಲೂಕು | ವಿಸ್ತೀರ್ಣ |
|---|---|---|
| 1 | ಬಂಗಾರಪೇಟೆ | 28804 |
| 2 | ಕೆ.ಜಿ.ಎಫ್ | 20858 |
| 3 | ಕೋಲಾರ | 47163 |
| 4 | ಮಾಲೂರು | 38727 |
| 5 | ಮುಳಬಾಗಿಲು | 51588 |
| 6 | ಶ್ರೀನಿವಾಸಪುರ | 46697 |
| | **ಒಟ್ಟು** | **233837** |

The taluk wise details of the cultivable land in Kolar District is as follows.

(Area in Hectares)

| Sl.No. | Taluk | Area |
|---|---|---|
| 1 | Bangarapete | 28804 |
| 2 | K.G.F | 20858 |
| 3 | Kolar | 47163 |
| 4 | Malur | 38727 |
| 5 | Mulabagilu | 51588 |
| 6 | Srinivasapura | 46697 |
| | **Total** | **233837** |

**ಆ)** ಈ ಜಮೀನಿನಲ್ಲಿ ನೀರಾವರಿಯಡಿಯಲ್ಲಿ ವ್ಯವಸಾಯ ಮಾಡುತ್ತಿರುವ ಜಮೀನಿನ ವಿಸ್ತೀರ್ಣವೆಷ್ಟು ಹಾಗೂ ಮಳೆ ಆಧಾರಿತ ವ್ಯವಸಾಯದ ಮಾಡಿತ್ತಿರುವ ಜಮೀನಿನ ವಿಸ್ತೀರ್ಣವೆಷ್ಟು; (ತಾಲ್ಲೂಕುವಾರು ಮಾಹಿತಿ ನೀಡುವುದು)

ನೀರಾವರಿ ಹಾಗೂ ಮಳೆಯಾಶ್ರಿತ ಜಮೀನಿನ ವಿಸ್ತೀರ್ಣದ ವಿವರಗಳು ಈ ಕೆಳಕಂಡಂತಿವೆ.

(ವಿಸ್ತೀರ್ಣ ಹೆಕ್ಟೇರ್ ಗಳಲ್ಲಿ)

| ಕ್ರ.ಸಂ. | ತಾಲ್ಲೂಕು | ವಿಸ್ತೀರ್ಣ | |
|---|---|---|---|
| | | ನೀರಾವರಿ | ಮಳೆಯಾಶ್ರಿತ |
| 1 | ಬಂಗಾರಪೇಟೆ | 2255 | 26549 |
| 2 | ಕೆ.ಜಿ.ಎಫ್ | 1633 | 19225 |
| 3 | ಕೋಲಾರ | 5258 | 41905 |
| 4 | ಮಾಲೂರು | 2935 | 35792 |
| 5 | ಮುಳಬಾಗಿಲು | 5208 | 46380 |
| 6 | ಶ್ರೀನಿವಾಸಪುರ | 2434 | 44263 |
| **ಒಟ್ಟು** | | **19723** | **214114** |

The details of Irrigated and Rainfed cultivable land in Kolar District is as follows.

(Area in Hectares)

| Sl.No | Taluk | Area | |
|---|---|---|---|
| | | Irrigated | Rainfed |
| 1 | Bangarapete | 2255 | 26549 |
| 2 | K.G.F | 1633 | 19225 |
| 3 | Kolar | 5258 | 41905 |
| 4 | Malur | 2935 | 35792 |
| 5 | Mulabagilu | 5208 | 46380 |
| 6 | Srinivasapura | 2434 | 44263 |
| **Total** | | **19723** | **214114** |

**ಇ)** ಈ ಜಿಲ್ಲೆಯಲ್ಲಿ ಬೆಳೆಯುವ ಬೆಳೆಗಳ ಆಧಾರದಲ್ಲಿ ಇಲಾಖೆಗಳ ವಿಂಗಡಣೆ ಮಾಡಲಾಗಿದೆಯೇ;

ಹೌದು (ಕೃಷಿ ಇಲಾಖೆ, ತೋಟಗಾರಿಕೆ ಇಲಾಖೆ ಹಾಗೂ ರೇಷ್ಮೆ ಇಲಾಖೆ) ಇಲಾಖೆಗಳ ವಿಂಗಡಣೆಯು ಬೆಳೆಗಳ ಆಧಾರಿತವಾಗಿದೆ.

Yes (Agriculture Department, Horticulture Department and Sericulture Department) Department bifurcation is based on crops only.

<table>
<tr>
<td>ಈ)</td>
<td>ಹಾಗಿದ್ದಲ್ಲಿ, ಕೃಷಿ ಇಲಾಖೆಯ ವ್ಯಾಪ್ತಿಯಲ್ಲಿರುವ ಒಟ್ಟು ಜಮೀನಿನ ವಿಸ್ತೀರ್ಣವೆಷ್ಟು; (ವಿವರ ನೀಡುವುದು)</td>
<td>ಕೃಷಿ ಇಲಾಖೆಯ ವ್ಯಾಪ್ತಿಯಲ್ಲಿರುವ ಒಟ್ಟು ಜಮೀನಿನ ವಿಸ್ತೀರ್ಣದ ವಿವರಗಳು ಈ ಕೆಳಕಂಡಂತಿವೆ.<br>
(ವಿಸ್ತೀರ್ಣ ಹೆಕ್ಟೇರ್ ಗಳಲ್ಲಿ)<br>
<table>
<tr><th>ಕ್ರ.ಸಂ.</th><th>ತಾಲ್ಲೂಕು</th><th>ವಿಸ್ತೀರ್ಣ</th></tr>
<tr><td>1</td><td>ಬಂಗಾರಪೇಟೆ</td><td>13705</td></tr>
<tr><td>2</td><td>ಕೆ.ಜಿ.ಎಫ್</td><td>9925</td></tr>
<tr><td>3</td><td>ಕೋಲಾರ</td><td>19115</td></tr>
<tr><td>4</td><td>ಮಾಲೂರು</td><td>16055</td></tr>
<tr><td>5</td><td>ಮುಳಬಾಗಿಲು</td><td>26015</td></tr>
<tr><td>6</td><td>ಶ್ರೀನಿವಾಸಪುರ</td><td>17185</td></tr>
<tr><td colspan="2">ಒಟ್ಟು</td><td>102000</td></tr>
</table>
ಕೃಷಿ ಬೆಳೆಗಳನ್ನು ಬೆಳೆಯಲು ಜಿಲ್ಲೆಯಲ್ಲಿ 102000 ಹೆಕ್ಟೇರ್ ಪ್ರದೇಶದ ಬಿತ್ತನೆ ಗುರಿಯನ್ನು ಹೊಂದಿದ್ದು, ಮಳೆ ಮತ್ತು ಇತರೆ ನೈಸರ್ಗಿಕ ಅಂಶಗಳ ಆಧಾರದ ಮೇಲೆ ಆವರಿಸಿದ ಬೆಳೆ ವಿಸ್ತೀರ್ಣವು ಅವಲಂಬಿಸಿರುತ್ತದೆ.<br><br>
The details of the total area of farming land under the Agriculture Department is as follows.<br>
(Area in Hectares)<br>
<table>
<tr><th>Sl.No.</th><th>Taluk</th><th>Area</th></tr>
<tr><td>1</td><td>Bangarapete</td><td>13705</td></tr>
<tr><td>2</td><td>K.G.F</td><td>9925</td></tr>
<tr><td>3</td><td>Kolar</td><td>19115</td></tr>
<tr><td>4</td><td>Malur</td><td>16055</td></tr>
<tr><td>5</td><td>Mulabagilu</td><td>26015</td></tr>
<tr><td>6</td><td>Srinivasapura</td><td>17185</td></tr>
<tr><td colspan="2">Total</td><td>102000</td></tr>
</table>
The target is fixed for 102000 ha. for the district. Sowing will be depend on rainfall and other weather factors.</td>
</tr>
</table>

ಉ) ಕಳೆದ ಎರಡು ವರ್ಷಗಳಲ್ಲಿ ಕೃಷಿ ಇಲಾಖೆಯಲ್ಲಿ ವಿತರಿಸಿರುವ ಬೆಳೆ ಪರಿಹಾರದ ಮೊತ್ತ ಹಾಗೂ ಸಬ್ಸಿಡಿ ಮೊತ್ತವೆಷ್ಟು; (ಸಂಪೂರ್ಣ ಮಾಹಿತಿ ನೀಡುವುದು)

ಕೋಲಾರ ಜಿಲ್ಲೆಗೆ ಕಂದಾಯ ಇಲಾಖೆಯಲ್ಲಿ ವಿತರಿಸಿದ ಪರಿಹಾರದ ಮೊತ್ತ ವಿವರಗಳು ಈ ಕೆಳಕಂಡಂತಿವೆ

(ರೂ.ಕೋಟಿಗಳಲ್ಲಿ)

| ವರ್ಷ | ರಾಜ್ಯ | | ಕೋಲಾರ | |
|---|---|---|---|---|
| | ಫಲಾನುಭವಿಗಳ ಸಂಖ್ಯೆ | ಪರಿಹಾರದ ಮೊತ್ತ | ಫಲಾನುಭವಿಗಳ ಸಂಖ್ಯೆ | ಪರಿಹಾರದ ಮೊತ್ತ |
| 2018-19 (ಬರ ಪರಿಹಾರ) | 22,76,326 | 1680.34 | 68,565 | 30.97 |
| 2019-20 (ಪ್ರವಾಹ ಪೀಡಿತ) | 6,54,391 | 1232.19 | 0 | 0 |

Compensation amount released from Revenue Department to State and Kolar District is as follows.

(Rs. In Crores)

| Year | State | | Kolar | |
|---|---|---|---|---|
| | No.of Beneficiaries | Compensation Amount | No.of Beneficiaries | Compensation Amount |
| 2018-19 (Drought) | 22,76,326 | 1680.34 | 68,565 | 30.97 |
| 2019-20 (Flood) | 6,54,391 | 1232.19 | 0 | 0 |

ಕಳೆದ ಎರಡು ವರ್ಷಗಳಲ್ಲಿ ಕೋಲಾರ ಜಿಲ್ಲೆಯಲ್ಲಿ ಕೃಷಿ ಇಲಾಖೆಯಿಂದ ವಿತರಿಸಿರುವ ಸಬ್ಸಿಡಿ ಮೊತ್ತದ ವಿವರವನ್ನು ಅನುಬಂಧ-1ರಲ್ಲಿ ಲಗತ್ತಿಸಿದೆ.

The details of subsidy disbursed by the Department of Agriculture in Kolar District during the last two years are given in Annexure-1.

| | | |
|---|---|---|
| ಊ) | ಕೃಷಿ ಇಲಾಖೆಯಲ್ಲಿ ಕೇವಲ ಪರಿಹಾರ ಮತ್ತು ಸಬ್ಸಿಡಿ ಮೊತ್ತ ವಿತರಿಸಲು ಮಾತ್ರ ಸೀಮಿತವಾಗಿರುವುದು ನಿಜವೇ; | ಕೃಷಿ ಇಲಾಖೆಯಲ್ಲಿ ಕೇವಲ ಪರಿಹಾರ ಮತ್ತು ಸಬ್ಸಿಡಿ ಮೊತ್ತ ವಿತರಿಸಲು ಮಾತ್ರ ಸೀಮಿತವಾಗಿರುವುದಿಲ್ಲ. ಅದರೊಂದಿಗೆ ನಿರ್ವಹಿಸುವ ಕಾರ್ಯಗಳ ವಿವರವನ್ನು ಅನುಬಂಧ-2ರಲ್ಲಿ ಲಗತ್ತಿಸಿದೆ.<br><br>Agriculture Department is not only restricted to give compensation and subsidy but also implementing various schemes. The details are in Annexure-2. |
| ಋ) | ಉತ್ತಮ ಕೃಷಿ ವಿಜ್ಞಾನ ಅಧಿಕಾರಿಗಳನ್ನು ಹೊಂದಿರುವ ಇಲಾಖೆಯು ಮುಂದಿನ ದಿನಗಳಲ್ಲಿ ರೈತರಿಗೆ ಪ್ರಸಕ್ತ ಬೆಳೆಯ ಪದ್ಧತಿಗಳು ಹಾಗೂ ತಾಂತ್ರಿಕ ನೈಪುಣ್ಯತೆಯ ಬಗ್ಗೆ ವಿಶೇಷ ಕಾರ್ಯಕ್ರಮಗಳನ್ನು ರೂಪಿಸಲು ಕ್ರಮ ಕೈಗೊಳ್ಳುವುದೇ? | ಕೃಷಿ ಇಲಾಖೆಯಲ್ಲಿ ರೈತರ ಅನುಕೂಲಕ್ಕಾಗಿ ವಿವಿಧ ಯೋಜನೆಗಳನ್ನು ಅನುಷ್ಠಾನಗೊಳಿಸುತ್ತಿದ್ದು, ಪ್ರಸ್ತುತ ಅನುಷ್ಠಾನ ಮಾಡುತ್ತಿರುವ ಯೋಜನೆಗಳಲ್ಲಿ ನೂತನ ಬೆಳೆ ಪದ್ಧತಿ, ತಾಂತ್ರಿಕತೆ, ಕೃಷಿ ಯಂತ್ರೋಪಕರಣ ಬಳಕೆ, ಸಂಸ್ಕರಣೆ, ಇತ್ಯಾದಿಗಳನ್ನು ಅಳವಡಿಸಿ ರೈತರ ಆದಾಯವನ್ನು ದ್ವಿಗುಣಗೊಳಿಸುವ ನಿಟ್ಟಿನಲ್ಲಿ ಇಲಾಖೆಯ ಅಧಿಕಾರಿಗಳ ಸೇವೆಯನ್ನು ಬಳಕೆ ಮಾಡಲು ಕಾರ್ಯಕ್ರಮಗಳನ್ನು ರೂಪಿಸಲಾಗುತ್ತಿದೆ.<br><br>Agriculture department is implementing various schemes for the benefit of the farmers. Under these schemes, programmes have been formulated to utilize the services of the departmental officers with a view to double the income of the farmers through adoption of new cropping system, technologies, farm mechanization, agro processing etc., |

**ಸಂಖ್ಯೆ: AGRI-ACT/40/ 2021**

(ಬಿ.ಸಿ. ಪಾಟೀಲ್)
ಕೃಷಿ ಸಚಿವರು

LCQ 1067ಕ್ಕೆ ಅನುಬಂಧ-1

| 2018-19 ನೇ ಸಾಲಿನಲ್ಲಿ ಕೋಲಾರ ಜಿಲ್ಲೆಯಲ್ಲಿ ಕೃಷಿ ಇಲಾಖೆಯಿಂದ ವಿತರಿಸಿರುವ ಸಬ್ಸಿಡಿ ಮೊತ್ತದ ವಿವರ (ರೂ.ಲಕ್ಷಗಳಲ್ಲಿ) | | | | |
|---|---|---|---|---|
| ಕ್ರ. ಸಂ | ಕೋಡ್ | ಯೋಜನೆ ಮತ್ತು ಲೆಕ್ಕ ಶೀರ್ಷಿಕೆ | ಬಿಡುಗಡೆಯಾದ ಅನುದಾನ | ವೆಚ್ಚ |
| | | (ಎ) ರಾಜ್ಯ ವಲಯ ಯೋಜನೆಗಳು | | |
| 1 | | ಕೃಷಿ ಭಾಗ್ಯ 2401-00-102-0-27 | | |
| | 106 | ಸಹಾಯಧನ | 1584.00 | 1583.63 |
| | 133 | ವಿಶೇಷ ಅಭಿವೃದ್ಧಿ ಯೋಜನೆ | 106.00 | 105.67 |
| | 422 | ಪರಿಶಿಷ್ಠ ಜಾತಿ ಉಪಯೋಜನೆ | 560.00 | 559.44 |
| | 423 | ಗಿರಿಜನ ಉಪಯೋಜನೆ | 84.00 | 82.40 |
| | | ಒಟ್ಟು | **2334.00** | **2331.14** |
| 2 | | ಕೃಷಿ ಪರಿಕರಗಳು ಮತ್ತು ಗುಣಮಟ್ಟ ನಿಯಂತ್ರಣ (2401-00-103-0-15) | | |
| | | ಬೀಜಗಳ ಪೂರೈಕೆ | | |
| | 106 | ಸಹಾಯಧನ | 16.00 | 15.42 |
| | 422 | ಪರಿಶಿಷ್ಠ ಜಾತಿ ಉಪಯೋಜನೆ | 25.38 | 25.32 |
| | 423 | ಗಿರಿಜನ ಉಪಯೋಜನೆ | 4.33 | 4.00 |
| | | ಒಟ್ಟು | **45.71** | **44.74** |
| | | ಸಸ್ಯ ಸಂರಕ್ಷಣೆ | | |
| | 106 | ಸಹಾಯಧನ | **3.00** | **2.80** |
| | | ಮಣ್ಣಿನ ಸತ್ವ ಹೆಚ್ಚಿಸುವಿಕೆ | | |
| | 106 | ಸಹಾಯಧನ | 29.49 | 29.43 |
| | 422 | ಪರಿಶಿಷ್ಠ ಜಾತಿ ಉಪಯೋಜನೆ | 21.85 | 21.83 |
| | 423 | ಗಿರಿಜನ ಉಪಯೋಜನೆ | 2.74 | 2.74 |
| | | ಒಟ್ಟು | **54.08** | **54.00** |
| | | ಕೃಷಿ ಯಾಂತ್ರೀಕರಣ ಮತ್ತು ಕೃಷಿ ಸಂಸ್ಕರಣೆ | | |
| | 106 | ಸಹಾಯಧನ | 275.90 | 275.10 |
| | 422 | ಪರಿಶಿಷ್ಠ ಜಾತಿ ಉಪಯೋಜನೆ | 168.77 | 168.53 |
| | 423 | ಗಿರಿಜನ ಉಪಯೋಜನೆ | 24.83 | 23.80 |
| | | ಒಟ್ಟು | **469.50** | **467.43** |
| | | ಕೃಷಿ ಪರಿಕರಗಳು ಮತ್ತು ಗುಣಮಟ್ಟ ನಿಯಂತ್ರಣ ಒಟ್ಟು | **572.29** | **568.97** |
| 3 | | ಸಾವಯವ ಕೃಷಿ (2401-00-104-0-12) | | |
| | 106 | ಸಹಾಯಧನ | 22.44 | 22.44 |
| | 422 | ಪರಿಶಿಷ್ಠ ಜಾತಿ ಉಪಯೋಜನೆ | 4.57 | 4.57 |
| | 423 | ಗಿರಿಜನ ಉಪಯೋಜನೆ | 1.68 | 1.68 |
| | | ಒಟ್ಟು | **28.69** | **28.69** |
| | | ರಾಜ್ಯ ವಲಯ ಯೋಜನೆಗಳ - ಒಟ್ಟು (ಎ) | **2934.98** | **2928.80** |
| II | | ಜಿಲ್ಲಾ ಪಂಚಾಯತ್ ಕಾರ್ಯಕ್ರಮಗಳು | | |
| 1 | | ಸಾವಯವ ಗೊಬ್ಬರಗಳು (2435-00-101-0-34) | 8.00 | 7.78 |
| | | ತಾಲ್ಲೂಕು ಪಂಚಾಯತ್‌ಗೆ ನೆರವು(2401-00-197-1-00) | | |
| 2 | | ರೈತರಿಗೆ ಸಹಾಯ-ಸಸ್ಯ ಸಂರಕ್ಷಣೆ (2435-00-101-0-63) | 6.95 | 6.90 |
| | | ಜಿಲ್ಲಾ ಪಂಚಾಯತ್ ಕಾರ್ಯಕ್ರಮಗಳ ಒಟ್ಟು | **14.95** | **14.68** |

| ಕ್ರ. ಸಂ | ಕೋಡ್ | ಯೋಜನೆ ಮತ್ತು ಲೆಕ್ಕ ಶೀರ್ಷಿಕೆ | ಬಿಡುಗಡೆಯಾದ ಅನುದಾನ | ವೆಚ್ಚ |
|---|---|---|---|---|
| III | | ಕೇಂದ್ರ ವಲಯ/ಪುರಸ್ಕೃತ ಯೋಜನೆಗಳು | | |
| 1 | | ರಾಷ್ಟ್ರೀಯ ಆಹಾರ ಸುರಕ್ಷತೆ ಮಿಶನ್ (2401-00-102-0-08) | | |
| | 106 | *ಸಹಾಯಧನ* | 95.52 | 91.02 |
| | 422 | *ಪರಿಶಿಷ್ಟ ಜಾತಿ ಉಪಯೋಜನೆ* | 21.00 | 20.80 |
| | 423 | *ಗಿರಿಜನ ಉಪಯೋಜನೆ* | 8.60 | 8.26 |
| | | ರಾಷ್ಟ್ರೀಯ ಆಹಾರ ಸುರಕ್ಷತೆ ಮಿಶನ್ ಒಟ್ಟು | **125.12** | **120.08** |
| 2 | | NMSA-ಮುಖ್ಯಮಂತ್ರಿಗಳ ಸೂಕ್ಷ್ಮ ನೀರಾವರಿ ಯೋಜನೆ (2401-00-108-1-15) | | |
| | 106 | *ಸಹಾಯಧನ* | 977.88 | 977.61 |
| | 422 | *ಪರಿಶಿಷ್ಟ ಜಾತಿ ಉಪಯೋಜನೆ* | 228.40 | 227.55 |
| | 423 | *ಗಿರಿಜನ ಉಪಯೋಜನೆ* | 55.67 | 55.04 |
| | | ***NMSA -ಮುಖ್ಯಮಂತ್ರಿಗಳ ಸೂಕ್ಷ್ಮ ನೀರಾವರಿ ಯೋಜನೆ ಒಟ್ಟು*** | **1261.95** | **1260.20** |
| 3 | | NMSA–ಇತರ ಘಟಕಗಳು (2401–00–108–1–16) | | |
| | | ಮಣ್ಣು ಆರೋಗ್ಯ ಚೀಟಿ | | |
| | 106 | *ಸಹಾಯಧನ* | **5.64** | **5.40** |
| | | *ಪರಂಪರಾಗತ ಕೃಷಿ ವಿಕಾಸ ಯೋಜನೆ (PKVY)* | | |
| | 059 | *ಸಹಾಯಧನ* | 3.58 | 3.58 |
| | 422 | *ಪರಿಶಿಷ್ಟ ಜಾತಿ ಉಪಯೋಜನೆ* | 6.31 | 6.30 |
| | 423 | *ಗಿರಿಜನ ಉಪಯೋಜನೆ* | 1.07 | 1.07 |
| | | ಒಟ್ಟು | **10.96** | **10.95** |
| | | NMSA-ಇತರೆ ಘಟಕಗಳು (2401-00-108-1-16) | **16.60** | **16.35** |
| 4 | | ಕೃಷಿ ಯಾಂತ್ರೀಕರಣ ಉಪ ಅಭಿಯಾನ (SMAM) | | |
| | 106 | *ಸಹಾಯಧನ* | 59.40 | 59.21 |
| | 422 | *ಪರಿಶಿಷ್ಟ ಜಾತಿ ಉಪಯೋಜನೆ* | 134.20 | 133.35 |
| | 423 | *ಗಿರಿಜನ ಉಪಯೋಜನೆ* | 53.83 | 53.58 |
| | | ಒಟ್ಟು | **247.43** | **246.14** |
| 5 | | ರಾಷ್ಟ್ರೀಯ ಕೃಷಿ ವಿಕಾಸ ಯೋಜನೆ (2401-00-800-1-57) | | |
| | 422 | *ಪರಿಶಿಷ್ಟ ಜಾತಿ ಉಪಯೋಜನೆ ಒಟ್ಟು* | 26.96 | 26.93 |
| | 423 | *ಗಿರಿಜನ ಉಪಯೋಜನೆ ಒಟ್ಟು* | 5.46 | 5.43 |
| | | ರಾಷ್ಟ್ರೀಯ ಕೃಷಿ ವಿಕಾಸ ಯೋಜನೆ ಮಹಾ ಮೊತ್ತ | **32.42** | **32.36** |
| | | ಕೇಂದ್ರ ವಲಯ/ಪುರಸ್ಕೃತ ಯೋಜನೆಗಳು - ಒಟ್ಟು | **1683.52** | **1675.13** |
| | | ಎಲ್ಲಾ ಒಟ್ಟು (2401 + 4401) | **4633.45** | **4618.61** |

LCQ 1067ಕ್ಕೆ ಅನುಬಂಧ-1

| 2019-20 ನೇ ಸಾಲಿನಲ್ಲಿ ಕೋಲಾರ ಜಿಲ್ಲೆಯಲ್ಲಿ ಕೃಷಿ ಇಲಾಖೆಯಿಂದ ವಿತರಿಸಿರುವ ಸಬ್ಸಿಡಿ ಮೊತ್ತದ ವಿವರ (ರೂ.ಲಕ್ಷಗಳಲ್ಲಿ) | | | | |
|---|---|---|---|---|
| ಕ್ರ. ಸಂ | ಕೋಡ್ | ಯೋಜನೆ ಮತ್ತು ಲೆಕ್ಕ ಶೀರ್ಷಿಕೆ | ಬಿಡುಗಡೆಯಾದ ಅನುದಾನ | ವೆಚ್ಚ |
| I | | (ಎ) ರಾಜ್ಯ ವಲಯ ಯೋಜನೆಗಳು | | |
| 1 | | ಕೃಷಿ ಭಾಗ್ಯ 2401-00-102-0-27 | | |
| | 106 | ಸಹಾಯಧನ | 837.68 | 837.32 |
| | 133 | ವಿಶೇಷ ಅಭಿವೃದ್ಧಿ ಯೋಜನ | 104.65 | 104.57 |
| | 422 | *ಪರಿಶಿಷ್ಟ ಜಾತಿ ಉಪಯೋಜನೆ* | 317.13 | 316.65 |
| | 423 | ಗಿರಿಜನ ಉಪಯೋಜನೆ | 76.20 | 75.82 |
| | | ಒಟ್ಟು | **1335.66** | **1334.36** |
| 2 | | ಕೃಷಿ ಪರಿಕರಗಳು ಮತ್ತು ಗುಣಮಟ್ಟ ನಿಯಂತ್ರಣ (2401-00-103-0-15) | | |
| | | ಬೀಜಗಳ ಪೂರೈಕೆ | | |
| | 106 | ಸಹಾಯಧನ | 10.43 | 10.19 |
| | 422 | *ಪರಿಶಿಷ್ಟ ಜಾತಿ ಉಪಯೋಜನೆ* | 26.12 | 26.01 |
| | 423 | *ಗಿರಿಜನ ಉಪಯೋಜನೆ* | 5.36 | 4.65 |
| | | ಒಟ್ಟು | **41.91** | **40.85** |
| | | ಸಸ್ಯ ಸಂರಕ್ಷಣೆ | | |
| | 106 | ಸಹಾಯಧನ | 23.00 | 22.98 |
| | | ಮಣ್ಣಿನ ಸತ್ವ ಹೆಚ್ಚಿಸುವಿಕೆ | | |
| | 106 | ಸಹಾಯಧನ | 35.11 | 34.96 |
| | 422 | *ಪರಿಶಿಷ್ಟ ಜಾತಿ ಉಪಯೋಜನ* | 12.31 | 12.28 |
| | 423 | *ಗಿರಿಜನ ಉಪಯೋಜನೆ* | 2.61 | 2.45 |
| | | ಒಟ್ಟು | **50.03** | **49.69** |
| | | ಕೃಷಿ ಯಾಂತ್ರೀಕರಣ ಮತ್ತು ಕೃಷಿ ಸಂಸ್ಕರಣೆ | | |
| | 106 | ಸಹಾಯಧನ | 154.28 | 148.55 |
| | 422 | *ಪರಿಶಿಷ್ಟ ಜಾತಿ ಉಪಯೋಜನೆ* | 206.35 | 204.83 |
| | 423 | *ಗಿರಿಜನ ಉಪಯೋಜನೆ* | 40.89 | 39.77 |
| | | ಒಟ್ಟು | **401.52** | **393.15** |
| | | ಕೃಷಿ ಪರಿಕರಗಳು ಮತ್ತು ಗುಣಮಟ್ಟ ನಿಯಂತ್ರಣ ಒಟ್ಟು | **516.46** | **506.67** |
| 3 | | ಸಾವಯವ ಕೃಷಿ (2401-00-104-0-12) | | |
| | | *ರೈತ ಸಿರಿ (ಹೊಸ ಕಾರ್ಯಕ್ರಮ)* | | |
| | 106 | ಸಹಾಯಧನ | 21.49 | 18.42 |
| | 422 | *ಪರಿಶಿಷ್ಟ ಜಾತಿ ಉಪಯೋಜನೆ* | 1.41 | 1.36 |
| | 423 | *ಗಿರಿಜನ ಉಪಯೋಜನೆ* | 0.70 | 0.62 |
| | | ಒಟ್ಟು | **23.60** | **20.40** |
| | | ರಾಜ್ಯ ವಲಯ ಯೋಜನೆಗಳ - ಒಟ್ಟು (ಎ) | **1875.72** | **1861.43** |
| II | | ಜಿಲ್ಲಾ ಪಂಚಾಯತ್ ಕಾರ್ಯಕ್ರಮಗಳು | | |
| 1 | | ಸಾವಯವ ಗೊಬ್ಬರಗಳು (2435-00-101-0-34) | 8.70 | 8.66 |
| | | ತಾಲ್ಲೂಕು ಪಂಚಾಯತ್‌ಗೆ ನೆರವು(2401-00-197-1-00) | | |
| 2 | | ರೈತರಿಗೆ ಸಹಾಯ-ಸಸ್ಯ ಸಂರಕ್ಷಣೆ (2435-00-101-0-63) | 7.70 | 7.66 |
| | | ಜಿಲ್ಲಾ ಪಂಚಾಯತ್ ಕಾರ್ಯಕ್ರಮಗಳ ಒಟ್ಟು | **16.40** | **16.32** |

| ಕ್ರ. ಸಂ | ಕೋಡ್ | ಯೋಜನೆ ಮತ್ತು ಲೆಕ್ಕ ಶೀರ್ಷಿಕೆ | ಬಿಡುಗಡೆಯಾದ ಅನುದಾನ | ವೆಚ್ಚ |
|---|---|---|---|---|
| III | | ಕೇಂದ್ರ ವಲಯ/ಪುರಸ್ಕೃತ ಯೋಜನೆಗಳು | | |
| 1 | | ರಾಷ್ಟ್ರೀಯ ಆಹಾರ ಸುರಕ್ಷತೆ ಮಿಶನ್ (2401-00-102-0-08) | | |
| | 106 | *ಸಹಾಯಧನ* | 171.88 | 165.93 |
| | 422 | *ಪರಿಶಿಷ್ಠ ಜಾತಿ ಉಪಯೋಜನೆ* | 38.07 | 37.27 |
| | 423 | *ಗಿರಿಜನ ಉಪಯೋಜನೆ* | 14.71 | 14.03 |
| | | ರಾಷ್ಟ್ರೀಯ ಆಹಾರ ಸುರಕ್ಷತೆ ಮಿಶನ್ ಒಟ್ಟು | **224.66** | **217.23** |
| 2 | | NMSA-ಮುಖ್ಯಮಂತ್ರಿಗಳ ಸೂಕ್ಷ್ಮ ನೀರಾವರಿ ಯೋಜನೆ (2401-00-108-1-15) | | |
| | 106 | *ಸಹಾಯಧನ* | 489.83 | 486.52 |
| | 422 | *ಪರಿಶಿಷ್ಠ ಜಾತಿ ಉಪಯೋಜನೆ* | 272.67 | 271.17 |
| | 423 | *ಗಿರಿಜನ ಉಪಯೋಜನೆ* | 41.42 | 40.83 |
| | | *NMSA -ಮುಖ್ಯಮಂತ್ರಿಗಳ ಸೂಕ್ಷ್ಮ ನೀರಾವರಿ ಯೋಜನೆ ಒಟ್ಟು* | **803.92** | **798.52** |
| 3 | | ಮಣ್ಣು ಆರೋಗ್ಯ ಚೀಟಿ | | |
| | 106 | *ಸಹಾಯಧನ* | 1.10 | 1.10 |
| | 422 | *ಪರಿಶಿಷ್ಠ ಜಾತಿ ಉಪಯೋಜನೆ* | 1.98 | 1.98 |
| | 423 | *ಗಿರಿಜನ ಉಪಯೋಜನೆ* | 1.00 | 0.96 |
| | | ಒಟ್ಟು | **4.08** | **4.04** |
| 4 | | ಕೃಷಿ ಯಾಂತ್ರೀಕರಣ ಉಪ ಅಭಿಯಾನ (SMAM) | | |
| | 106 | *ಸಹಾಯಧನ* | 164.45 | 164.33 |
| | 422 | *ಪರಿಶಿಷ್ಠ ಜಾತಿ ಉಪಯೋಜನೆ* | 100.85 | 100.5 |
| | 423 | *ಗಿರಿಜನ ಉಪಯೋಜನೆ* | 56.13 | 49.61 |
| | | ಒಟ್ಟು | **321.43** | **314.44** |
| 5 | | ರಾಷ್ಟ್ರೀಯ ಕೃಷಿ ವಿಕಾಸ ಯೋಜನೆ (2401-00-800-1-57) | | |
| | 106 | *ಸಹಾಯಧನ* | 145.77 | 140.68 |
| | 422 | *ಪರಿಶಿಷ್ಠ ಜಾತಿ ಉಪಯೋಜನೆ ಒಟ್ಟು* | 17.17 | 15.96 |
| | 423 | *ಗಿರಿಜನ ಉಪಯೋಜನೆ ಒಟ್ಟು* | 4.59 | 3.41 |
| | | ರಾಷ್ಟ್ರೀಯ ಕೃಷಿ ವಿಕಾಸ ಯೋಜನೆ ಮಹಾ ಮೊತ್ತ | **167.53** | **160.05** |
| | | ಕೇಂದ್ರ ವಲಯ/ಪುರಸ್ಕೃತ ಯೋಜನೆಗಳು - ಒಟ್ಟು | **1521.62** | **1490.24** |
| | | ಎಲ್ಲಾ ಒಟ್ಟು (2401 + 4401) | **3413.74** | **3367.99** |

## ಅನುಬಂಧ-2

## ರೈತರ ಅನುಕೂಲಕ್ಕಾಗಿ ಕೃಷಿ ಇಲಾಖೆಯಿಂದ ಅನುಷ್ಠಾನಗೊಳಿಸಿರುವ ಯೋಜನೆಗಳ ವಿವರಗಳು

**ರಾಜ್ಯ ಸರ್ಕಾರದ ಯೋಜನೆಗಳು:**

1) **ಬಿತ್ತನೆ ಬೀಜಗಳ ಪೂರೈಕೆ:** ಈ ಯೋಜನೆಯಡಿ ಸಾಮಾನ್ಯ ವರ್ಗದ ರೈತರಿಗೆ ಶೇ. 50 ಹಾಗೂ ಪರಿಶಿಷ್ಟ ಜಾತಿ/ ಪಂಗಡದ ರೈತರಿಗೆ ಶೇ.75 ರ ರಿಯಾಯಿತಿ ದರದಲ್ಲಿ ಭತ್ತ, ರಾಗಿ, ಜೋಳ, ಮುಸುಕಿನ ಜೋಳ, ಸಜ್ಜೆ, ತೊಗರಿ, ಕಡಲೆ, ಹೆಸರು, ಉದ್ದು, ಅಲಸಂದೆ, ನೆಲಗಡಲೆ, ಸೂರ್ಯಕಾಂತಿ, ಸೋಯಾ ಅವರೆ, ಹತ್ತಿ ಇತ್ಯಾದಿ ಬೆಳೆಗಳ ಪ್ರಮಾಣಿತ/ ನಿಜ ಚೀಟಿ ಬಿತ್ತನೆ ಬೀಜಗಳನ್ನು ವಿತರಣೆ ಮಾಡಲಾಗುವುದು.
2) **ಸಸ್ಯ ಸಂರಕ್ಷಣೆ:** ಈ ಕಾರ್ಯಕ್ರಮದಡಿ ರಾಜ್ಯದಲ್ಲಿ ಬೆಳೆಯುವ ಕೃಷಿ ಬೆಳೆಗಳನ್ನು ಬಾಧಿಸುವ ಕೀಟ ರೋಗಗಳ ನಿರ್ವಹಣೆ ಹಾಗೂ ಸಂಗ್ರಹಿಸಿದ ಧಾನ್ಯಗಳನ್ನು ಕೀಟ-ರೋಗಗಳಿಂದ ಸಂರಕ್ಷಿಸಲು ತಾಂತ್ರಿಕತೆ/ ತಂತ್ರಜ್ಞಾನ ನೀಡುವುದು. ಇಲಾಖೆಯಲ್ಲಿ ಅನುಷ್ಠಾನಗೊಳಿಸುತ್ತಿರುವ ಬೀಜ, ರಸಗೊಬ್ಬರ ಮತ್ತು ಕೀಟನಾಶಕ ಕಾಯ್ದೆ ಮತ್ತು ಕಾನೂನು ಕ್ರಮಗಳನ್ನು ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸಲಾಗುವುದು. ಜೈವಿಕ ಪೀಡೆನಾಶಕಗಳು ಮತ್ತು ಸಸ್ಯ ಸಂರಕ್ಷಣಾ ಔಷಧಿಗಳನ್ನು ಎಲ್ಲಾ ವರ್ಗದ ರೈತರಿಗೆ ಶೇ.50 ಸಹಾಯಧನವನ್ನು ನೀಡಲಾಗುತ್ತಿದೆ. ಇದಲ್ಲದೆ, ಬೀಜೋಪಚಾರ ಆಂದೋಲನ ಮತ್ತು ಸುರಕ್ಷಿತ ಕೀಟನಾಶಕಗಳ ಬಳಕೆ ಬಗ್ಗೆ ಎಲ್ಲಾ ರೈತರಿಗೆ ತರಬೇತಿಗಳನ್ನು ಆಯೋಜಿಸಲಾಗುತ್ತದೆ.
3) **ಮಣ್ಣಿನ ಸತ್ವ ಹೆಚ್ಚಿಸುವಿಕೆ :** ಮಣ್ಣಿನ ಫಲವತ್ತತೆ ಮತ್ತು ಬೆಳೆ ಉತ್ಪಾದಕತೆಯನ್ನು ಹೆಚ್ಚಿಸಲು ಜೈವಿಕ ಗೊಬ್ಬರಗಳು, ಲಘುಪೋಷಕಾಂಶಗಳು, ಜಿಪ್ಸಂ, ಕೃಷಿ ಸುಣ್ಣ/ಡೊಲೋಮೈಟ್, ಹಸಿರೆಲೆ ಗೊಬ್ಬರ ಬೀಜ, ಎರೆಹುಳು ಗೊಬ್ಬರ, ಸಾವಯವ ಗೊಬ್ಬರಗಳನ್ನು ಸಾಮಾನ್ಯ ವರ್ಗದ ರೈತರಿಗೆ ಶೇ.50 ಹಾಗೂ ಪರಿಶಿಷ್ಟ ಜಾತಿ/ ಪಂಗಡದ ರೈತರಿಗೆ ಶೇ.75ರ ಸಹಾಯಧನದಡಿ ನೀಡುವುದರ ಜೊತೆಗೆ ಬಯೋಡೈಜೆಸ್ಟರ್ ಘಟಕ ಮತ್ತು ಎರೆಹುಳು ಗೊಬ್ಬರ ಉತ್ಪಾದನೆ ಘಟಕ ಸ್ಥಾಪನೆಗೆ ಸಾಮಾನ್ಯ ವರ್ಗದ ರೈತರಿಗೆ ಶೇ.50 ಹಾಗೂ ಪರಿಶಿಷ್ಟ ಜಾತಿ/ ಪಂಗಡದ ರೈತರಿಗೆ ಶೇ.75ರ ಸಹಾಯಧನವನ್ನು ನೀಡಲಾಗುತ್ತಿದೆ.
4) **ಕೃಷಿ ಯಾಂತ್ರೀಕರಣ ಮತ್ತು ಕೃಷಿ ಸಂಸ್ಕರಣೆ :** ಈ ಕಾರ್ಯಕ್ರಮದಡಿ ರೈತರು ಸಕಾಲದಲ್ಲಿ ಕೃಷಿ ಚಟುವಟಿಕೆಗಳನ್ನು ಕೈಗೊಳ್ಳಲು ಹಾಗೂ ಕೃಷಿ ಕಾರ್ಮಿಕರ ಮೇಲಿನ ಅವಲಂಬನೆಯನ್ನು ಕಡಿಮೆ ಮಾಡಲು ಕೃಷಿ ಯಂತ್ರೋಪಕರಣಗಳಿಗೆ ಸಹಾಯಧನ ಒದಗಿಸಲಾಗುವುದು (ಸಾಮಾನ್ಯ ವರ್ಗದ ರೈತರಿಗೆ ಶೇ. 50 ಮತ್ತು ಪರಿಶಿಷ್ಟ ಜಾತಿ/ ಪಂಗಡದ ರೈತರಿಗೆ ಶೇ.90) ಸಣ್ಣ ಟ್ರ್ಯಾಕ್ಟರ್ ಖರೀದಿಗೆ ಪರಿಶಿಷ್ಟ ಜಾತಿ/ ಪಂಗಡದ ರೈತರಿಗೆ ಸಣ್ಣ ಟ್ರ್ಯಾಕ್ಟರುಗಳಿಗೆ ರೂ.3.00ಲಕ್ಷ ಸಹಾಯಧನ ನೀಡಲಾಗುವುದು. ಕೃಷಿ ಸಂಸ್ಕರಣೆ ಘಟಕಗಳು ಮತ್ತು ಟಾರ್ಪಾಲೀನ್ ಗಳಿಗೆ ಸಾಮಾನ್ಯ ವರ್ಗದ ರೈತರಿಗೆ ಶೇ. 50 ಮತ್ತು ಪರಿಶಿಷ್ಟ ಜಾತಿ/ ಪಂಗಡದ ರೈತರಿಗೆ ಶೇ.90ರ ಸಹಾಯಧನವನ್ನು ನೀಡಲಾಗುತ್ತದೆ.
5) **ಕೃಷಿ ಯಂತ್ರಧಾರೆ:** ರಾಜ್ಯದಲ್ಲಿ ಸಣ್ಣ ಮತ್ತು ಅತಿಸಣ್ಣ ರೈತರಿಗೆ ಸಕಾಲದಲ್ಲಿ ಕೃಷಿ ಚಟುವಟಿಕೆಗಳನ್ನು ಕೈಗೊಳ್ಳಲು ಅನುವಾಗುವಂತೆ, ಕಡಿಮೆ ಬಾಡಿಗೆ ದರದಲ್ಲಿ ಭೂಮಿ ಸಿದ್ಧತೆಯಿಂದ ಕೊಯ್ಲು ಮತ್ತು ಸಂಸ್ಕರಣೆಗೆ ಉಪಯುಕ್ತವಾಗುವ ವಿವಿಧ ಕೃಷಿ ಯಂತ್ರೋಪಕರಣಗಳನ್ನು ರೈತರಿಗೆ ಬಾಡಿಗೆ ಆಧಾರದ ಮೇಲೆ ಉಪಯೋಗಿಸಲು ಅವಕಾಶ ಕಲ್ಪಿಸಲು ಹೋಬಳಿ ಕೇಂದ್ರಗಳಲ್ಲಿ ಆಯ್ದ ಸಂಸ್ಥೆಗಳ ಸಹಯೋಗದೊಂದಿಗೆ

ಕೃಷಿ ಯಂತ್ರಧಾರೆ (ಕೃಷಿ ಯಂತ್ರೋಪಕರಣ ಬಾಡಿಗೆ ಆಧಾರಿತ ಸೇವಾ) ಕೇಂದ್ರಗಳನ್ನು ತೆರೆಯಲಾಗಿರುತ್ತದೆ.

6) **ಸಾವಯವ ಕೃಷಿ ಮತ್ತು ಶೂನ್ಯ ಬಂಡವಾಳ ನೈಸರ್ಗಿಕ ಕೃಷಿ:** ಸಾವಯವ ಭಾಗ್ಯ ಯೋಜನೆಯಡಿ ಸಾವಯವ ಕೃಷಿ ಪದ್ಧತಿಗೆ ಅಳವಡಿಸಿರುವ ಪ್ರದೇಶವನ್ನು ಸಾವಯವ ಗುಂಪು ಪ್ರಮಾಣೀಕರಣಕ್ಕೆ ಒಳಪಡಿಸಲು ಸಹಾಯಧನ ನೀಡಲಾಗುವುದು. ಇದಲ್ಲದೆ, ಶೂನ್ಯ ಬಂಡವಾಳ ಕೃಷಿ ಉತ್ಪಾದನಾ ಪದ್ಧತಿಯನ್ನು ಕೃಷಿ ವಿಶ್ವವಿದ್ಯಾನಿಲಯಗಳ ಮೂಲಕ ವೈಜ್ಞಾನಿಕವಾಗಿ ಮೌಲ್ಯೀಕರಿಸಲು ಅನುದಾನವನ್ನು ಕಲ್ಪಿಸಲಾಗಿದೆ.

7) **ರೈತ ಸಿರಿ:** ಈ ಕಾರ್ಯಕ್ರಮದಡಿ ರಾಜ್ಯದಲ್ಲಿ ಸಿರಿಧಾನ್ಯಗಳ ಉತ್ಪಾದನೆಯನ್ನು ಪ್ರೋತ್ಸಾಹಿಸಲು ಮತ್ತು ರೈತರ ಆದಾಯವನ್ನು ಹೆಚ್ಚಿಸಲು ಸಿರಿಧಾನ್ಯಗಳಾದ ನವಣೆ, ಹಾರಕ, ಕೊರಲೆ, ಸಾಮೆ, ಊದಲು ಬೆಳೆಗಳನ್ನು ಬೆಳೆದ ಎಲ್ಲಾ ವರ್ಗದ ರೈತರಿಗೆ ಪ್ರತಿ ಹೆಕ್ಟೇರಿಗೆ ರೂ.10000/-ದಂತೆ ಗರಿಷ್ಠ ಎರಡು ಹೆಕ್ಟೇರುಗಳಿಗೆ ಪ್ರೋತ್ಸಾಹಧನವನ್ನು ನೇರ ನಗದು ವರ್ಗಾವಣೆ ಮೂಲಕ ನೀಡಲಾಗುವುದು.

8) **ಪ್ರಧಾನ ಮಂತ್ರಿ ಕಿಸಾನ್ ಸಮ್ಮಾನ್ ನಿಧಿ ಯೋಜನೆ:** ಭಾರತ ಸರ್ಕಾರದ ಪ್ರಧಾನ ಮಂತ್ರಿ ಕಿಸಾನ್ ಸಮ್ಮಾನ್ ನಿಧಿ ಯೋಜನೆಯಡಿ ಸಾಗುವಳಿ ಭೂಮಿ ಹೊಂದಿರುವ ಎಲ್ಲಾ ಅರ್ಹ ರೈತರಿಗೆ ವಾರ್ಷಿಕರೂ. **6000/**-ಗಳ ನಗದನ್ನು ರೂ.**2000/**-ಗಳಂತೆ ಮೂರು ಕಂತುಗಳಲ್ಲಿ ನಾಲ್ಕು ತಿಂಗಳಿಗೊಮ್ಮೆ ನೀಡಲಾಗುವುದು. ಕೇಂದ್ರ ಸರ್ಕಾರದ ಪಿ.ಎಂ.ಕಿಸಾನ್ ಯೋಜನೆಯ ಎಲ್ಲಾ ಅರ್ಹ ರೈತರಿಗೆ ದಿನಾಂಕ 14.08.2019 ರಿಂದ ರಾಜ್ಯ ಸರ್ಕಾರವು ಹೆಚ್ಚುವರಿಯಾಗಿ ರೂ.**4000**/ಗಳನ್ನು ಎರಡು ಕಂತುಗಳಲ್ಲಿ ಆರ್ಥಿಕ ನೆರವನ್ನು **ಪಿ.ಎಂ.ಕಿಸಾನ್-ಕರ್ನಾಟಕ** ಯೋಜನೆಯಡಿ ನೀಡಲಾಗುತ್ತಿದೆ.

9) **ಕರ್ನಾಟಕ ರೈತ ಸುರಕ್ಷಾ ಪ್ರಧಾನ ಮಂತ್ರಿ ಫಸಲ್ ಬಿಮಾ ಯೋಜನೆ**: ಈ ಯೋಜನೆಯಡಿ ಪ್ರಕೃತಿ ವಿಕೋಪಗಳು, ಕೀಟಗಳು ಮತ್ತು ರೋಗಗಳಿಂದಾಗಿ ಯಾವುದೇ ಅಧಿಸೂಚಿತ ಬೆಳೆ ವಿಫಲವಾದ ಪಕ್ಷದಲ್ಲಿ ರೈತರಿಗೆ ವಿಮಾ ರಕ್ಷಣೆ ಮತ್ತು ಹಣಕಾಸು ಬೆಂಬಲ ನೀಡಲಾಗುವುದು. ರೈತರಿಗೆ ನೀಡುವ ವಿಮಾ ಕಂತಿನ ರಿಯಾಯಿತಿಯಲ್ಲಿ ರಾಜ್ಯ ಸರ್ಕಾರದ ಪಾಲನ್ನು ನೀಡಿ ಬೆಳೆ ವಿಮಾ ನಷ್ಟ ಪರಿಹಾರವನ್ನು ಇತ್ಯರ್ಥಪಡಿಸಲು ಅನುವು ಮಾಡಲಾಗುವುದು.

10) **ರಾಸಾಯನಿಕ ಗೊಬ್ಬರದ ಮೇಲಿನ ಬಡ್ಡಿ ಸಹಾಯಧನ**: ಈ ಕಾರ್ಯಕ್ರಮದಡಿ ರಸಗೊಬ್ಬರಗಳನ್ನು ಮುಂಗಡವಾಗಿ ದಾಸ್ತಾನು ಮಾಡಲು ರಸಗೊಬ್ಬರ ಖರೀದಿಗೆ ರಾಷ್ಟ್ರೀಕೃತ ಬ್ಯಾಂಕುಗಳಿಂದ ಕರ್ನಾಟಕ ರಾಜ್ಯ ಸಹಕಾರ ಮಾರಾಟ ಮಂಡಳಿ ನಿಯಮಿತರವರು ಪಡೆದಿರುವ ಸಾಲದ ಮೇಲಿನ ಬಡ್ಡಿ, ರಸಗೊಬ್ಬರಗಳ ಶೇಖರಣಾ/ದಾಸ್ತಾನು ವೆಚ್ಚ, ರಸಗೊಬ್ಬರ ಹಮಾಲಿ, ಸಾಗಾಣಿಕೆ ಮತ್ತು ನಿರ್ವಹಣೆ ವೆಚ್ಚಗಳನ್ನು ಭರಿಸಲಾಗುವುದು.

11) **ಕೃಷಿ ಪ್ರಶಸ್ತಿ ಮತ್ತು ಕೃಷಿ ಪಂಡಿತ್ ಪ್ರಶಸ್ತಿ**: ರಾಜ್ಯದ ರೈತರಲ್ಲಿ ಹೆಚ್ಚಿನ ಉತ್ಪಾದನೆ ಮಾಡುವ ಮನೋಭಾವ ಉಂಟುಮಾಡಲು ರಾಜ್ಯ, ಜಿಲ್ಲಾ ಹಾಗೂ ತಾಲ್ಲೂಕು ಮಟ್ಟದಲ್ಲಿ ಸ್ಪರ್ಧೆಗಳನ್ನು ಏರ್ಪಡಿಸಿ ಬಹುಮಾನಗಳನ್ನು(ಕೃಷಿ ಪ್ರಶಸ್ತಿ) ನೀಡಲಾಗುವುದು. ಕೃಷಿ ಕ್ಷೇತ್ರದಲ್ಲಿ ಅಮೂಲ್ಯ ಅನ್ವೇಷಣೆ ಹಾಗೂ ಸೃಜನಾತ್ಮಕ ಕಾರ್ಯಗಳನ್ನು ಕೈಗೊಂಡ ರೈತರನ್ನು ಗುರುತಿಸಿ, ಅವರಿಗೆ ಕೃಷಿ ಪಂಡಿತ ಪ್ರಶಸ್ತಿಯನ್ನು ನೀಡಲಾಗುವುದು.

12) **ಬೆಳೆ ಸಾಲಕ್ಕೆ ಸಹಾಯಧನ**: ಈ ಯೋಜನೆಯಡಿ ರಾಜ್ಯದ ರೈತರಿಗೆ ನೀಡಿದ ಬೆಳೆ ಸಾಲ/ಅಲ್ಪಾವಧಿ ಸಾಲವನ್ನು ನಿಗದಿತ ಅವಧಿಯೊಳಗೆ ಮರುಪಾವತಿ ಮಾಡಿದ ರೈತರಿಗೆ

ಶೇ.1ರ ಬಡ್ಡಿ ರಿಯಾಯಿತಿಯನ್ನು(ಸರ್ಕಾರಿ ಸ್ವಾಮ್ಯದ ವಾಣಿಜ್ಯ ಬ್ಯಾಂಕುಗಳು ಹಾಗೂ ಪ್ರಾದೇಶಿಕ ಗ್ರಾಮೀಣಾಭಿವೃದ್ಧಿ ಬ್ಯಾಂಕುಗಳ ಮೂಲಕ) ನೀಡಲಾಗುವುದು.

13) **ಕೃಷಿ ಬೆಲೆ ಆಯೋಗ**: ಕೃಷಿ ಉತ್ಪನ್ನಗಳಿಗೆ ಉತ್ತಮ ಪ್ರತಿಫಲ ಬೆಲೆ ಒದಗಿಸಲು, ಮಾರುಕಟ್ಟೆ ಮೂಲ ಸೌಕರ್ಯವನ್ನು ಉತ್ತಮಗೊಳಿಸಲು, ಬೆಲೆ ಮತ್ತು ಬೆಲೇಯೇತರ ಕ್ರಮಗಳಿಂದ ಮಾರುಕಟ್ಟೆ ಸ್ಥಿರೀಕರಿಸಲು, ಹೆಚ್ಚಿನ ಉತ್ಪಾದನೆ ಸಮಯದಲ್ಲಿ ಮಾರುಕಟ್ಟೆ ಮಧ್ಯೆ ಪ್ರವೇಶ ಮಾಡಲು, ರೈತರಿಗೆ ಲಾಭದಾಯಕ ಬೆಲೆ ಪಡೆಯುವುದಕ್ಕಾಗಿ ಚೌಕಾಶಿ ಸಾಮರ್ಥ್ಯ ಮತ್ತು ಮಾರುಕಟ್ಟೆ ಸುಧಾರಣೆ, ಬೆಳೆ ವಿಮೆ, ಇ-ವ್ಯಾಪಾರ ಇತ್ಯಾದಿಗಳ ಬಗ್ಗೆ ಅಧ್ಯಯನ ಕೈಗೊಂಡು ಸರ್ಕಾರಕ್ಕೆ ಸಲಹೆ/ಶಿಫಾರಸ್ಸು ಮಾಡುವ ಸಲುವಾಗಿ ಕೃಷಿ ಬೆಲೆ ಆಯೋಗವನ್ನು ರಚಿಸಲಾಗಿರುತ್ತದೆ.

14) **ಕೃಷಿ ಅಭಿಯಾನ**- "ಇಲಾಖೆಗಳ ನಡಿಗೆ ರೈತರ ಬಾಗಿಲಿಗೆ"- ಈ ಕಾರ್ಯಕ್ರಮದಡಿ ಹೋಬಳಿ ಮಟ್ಟದಲ್ಲಿ ಕೃಷಿ ಮತ್ತು ಸಂಬಂಧಿಸಿದ ಇಲಾಖೆಗಳಾದ ಜಲಾನಯನ ಅಭಿವೃದ್ಧಿ, ತೋಟಗಾರಿಕೆ, ರೇಷ್ಮೆ, ಮೀನುಗಾರಿಕೆ, ಅರಣ್ಯ, ಮಹಿಳಾ ಮತ್ತು ಮಕ್ಕಳ ಕಲ್ಯಾಣ ಇಲಾಖೆಗಳ ಸಮಗ್ರ ಕೃಷಿ ಮಾಹಿತಿ ಮತ್ತು ಈ ಎಲ್ಲಾ ಇಲಾಖೆಗಳಿಂದ ಅನುಷ್ಠಾನಗೊಳಿಸಲಾಗುತ್ತಿರುವ ವಿವಿಧ ಯೋಜನೆಗಳ ಮಾಹಿತಿಯನ್ನು ಏಕ ಗವಾಕ್ಷಿ ವಿಸ್ತರಣಾ ಪದ್ಧತಿಯಲ್ಲಿ ಪ್ರಚಾರ ನೀಡಲಾಗುವುದು.

15) **ಕೃಷಿ ಮೇಳ ಮತ್ತು ವಸ್ತುಪ್ರದರ್ಶನ**: ಇದರಡಿ ರೈತರಿಗೆ ಸುಧಾರಿತ ತಾಂತ್ರಿಕತೆಗಳನ್ನು ತಲುಪಿಸಲು ಸ್ಥಳೀಯ ಜಾತ್ರೆ ಮತ್ತು ವಿಶೇಷ ಸಂದರ್ಭಗಳಲ್ಲಿ ಇಲಾಖೆಗಳ ಚಟುವಟಿಕೆಗಳ ಕುರಿತು ಪರಿಣಾಮಕಾರಿಯಾಗಿ ಪ್ರಚುರಪಡಿಸಲು ವಸ್ತು ಪ್ರದರ್ಶನ/ ಕಾರ್ಯಾಗಾರ/ ಮೇಳ/ ಸಿಂಪೋಸಿಯಂಗಳನ್ನು ರಾಷ್ಟ್ರ, ಅಂತರ ರಾಜ್ಯ, ರಾಜ್ಯ, ಜಿಲ್ಲಾ, ತಾಲ್ಲೂಕು ಮಟ್ಟದಲ್ಲಿ ಮತ್ತು ಸ್ಥಳೀಯವಾಗಿ ಏರ್ಪಡಿಸಲಾಗುವುದು.

16) **ಕೃಷಿ ವಾರ್ತಾ ಘಟಕ**: ರಾಜ್ಯ, ಜಿಲ್ಲಾ ಮತ್ತು ತಾಲ್ಲೂಕು ಮಟ್ಟದಲ್ಲಿ ಕೃಷಿಗೆ ಸಂಬಂಧಿಸಿದ ವಿಸ್ತರಣಾ ಸಾಹಿತ್ಯಗಳು/ ಕೃಷಿ ಸಂಬಂಧಿತ ತಾಂತ್ರಿಕ ಪುಸ್ತಕ ಮುದ್ರಣ, ಆಕಾಶವಾಣಿ ಮತ್ತು ದೂರದರ್ಶನ ಕೇಂದ್ರಗಳ ಮೂಲಕ ನೇರ ಫೋನ್-ಇನ್ ಕಾರ್ಯಕ್ರಮಗಳು, ವಿವಿಧ ಮಾಧ್ಯಮಗಳ ಮೂಲಕ ಜಾಹೀರಾತು/ ಪ್ರಕಟಣೆ ಮತ್ತು ಇನ್ನಿತರೆ ಪ್ರಚಾರ ಕಾರ್ಯಗಳನ್ನು ಸದರಿ ಯೋಜನೆಯಡಿ ಕೈಗೊಳ್ಳಲಾಗುವುದು.

17) **ತರಬೇತಿ ಕಾರ್ಯಕ್ರಮಗಳು**: ಈ ಯೋಜನೆಯಡಿ ಕೃಷಿ ವಿಸ್ತರಣಾ ಅಧಿಕಾರಿಗಳ ನಿರ್ವಹಣಾ ಸಾಮರ್ಥ್ಯ ಮತ್ತು ರೈತರ/ ರೈತ ಮಹಿಳೆಯರ ವೃತ್ತಿ ಸಾಮರ್ಥ್ಯವನ್ನು ಹೆಚ್ಚಿಸಲು ಕೃಷಿ ತಾಂತ್ರಿಕತೆಗಳಿಗೆ ಸಂಬಂಧಿಸಿದಂತೆ ವಿಶೇಷ ತರಬೇತಿಗಳನ್ನು ಹಾಗೂ ಅಧ್ಯಯನ ಪ್ರವಾಸಗಳನ್ನು ಆಯೋಜಿಸಲಾಗುವುದು.

**ಕೇಂದ್ರ ಪುರಸ್ಕೃತ ಯೋಜನೆಗಳು:**

18) **ಮಣ್ಣು ಆರೋಗ್ಯ ಕಾರ್ಯಕ್ರಮ:** ಮಣ್ಣು ಆರೋಗ್ಯ ಚೀಟಿ ಶಿಫಾರಸ್ಸಿನ ಅನ್ವಯ ಪ್ರಾತ್ಯಕ್ಷಿಕೆಗಳನ್ನು ಕೈಗೊಳ್ಳಲು ರಿಯಾಯಿತಿ ದರದಲ್ಲಿ ರಸಗೊಬ್ಬರ, ಸಾವಯವ ಗೊಬ್ಬರ, ಜೈವಿಕ ಗೊಬ್ಬರ, ಲಘುಪೋಷಕಾಂಶ ಮಣ್ಣು ಸುಧಾರಕಗಳನ್ನು ಗರಿಷ್ಟ ರೂ.2500/- (ಒಂದು ಹೇಕ್ಟೇರಿಗೆ) ಸಹಾಯಧನ ನೀಡಲಾಗುತ್ತದೆ. ಈ ಕಾರ್ಯಕ್ರಮವನ್ನು ಕೇಂದ್ರ ಸರ್ಕಾರದ ಮಾರ್ಗಸೂಚಿಯಂತೆ ಮೊದಲು ಮಾದರಿ ಗ್ರಾಮಗಳಲ್ಲಿ ಮಾತ್ರ ಅನುಷ್ಠಾನಗೊಳಿಸಲಾಗುತ್ತಿದೆ. ಇದಲ್ಲದೆ, ಗ್ರಾಮ ಮಟ್ಟದ ಮಣ್ಣು ಪರೀಕ್ಷಾ ಘಟಕಗಳನ್ನು ಸ್ಥಾಪಿಸಲು ಶೇ.75ರ ಸಹಾಯಧನ (ರೂ.3.75ಲಕ್ಷ) ನೀಡಲಾಗುತ್ತಿದೆ.

19) **ರಾಷ್ಟ್ರೀಯ ಆಹಾರ ಸುರಕ್ಷತಾ ಅಭಿಯಾನ:** ಈ ಯೋಜನೆಯಡಿ ಬತ್ತ, ದ್ವಿದಳಧಾನ್ಯ, ನ್ಯೂಟ್ರಿ ಸಿರಿಧಾನ್ಯ, ಎಣ್ಣೆಕಾಳು, ಕಬ್ಬು ಮತ್ತು ಹತ್ತಿ ಬೆಳೆಗಳ ಉತ್ಪಾದನೆಯನ್ನು ಹೆಚ್ಚಿಸಲು ಆಧುನಿಕ ತಾಂತ್ರಿಕತೆಗಳ ಗುಚ್ಛ ಪ್ರಾತ್ಯಕ್ಷಿಕೆಗಳನ್ನು ಆಯೋಜಿಸುವುದರ ಜೊತೆಗೆ ಬತ್ತ, ದ್ವಿದಳಧಾನ್ಯ, ನ್ಯೂಟ್ರಿ ಸಿರಿಧಾನ್ಯ ಉತ್ಪಾದನೆಗೆ ಬಿತ್ತನೆ ಬೀಜ, ಲಘು ಪೋಷಕಾಂಶಗಳು, ಜೈವಿಕ ಗೊಬ್ಬರಗಳು, ಸಸ್ಯ ಸಂರಕ್ಷಣಾ ರಾಸಾಯನಿಕಗಳು, ಜಿಪ್ಸಂ/ ಕೃಷಿ ಸುಣ್ಣ, ಕೃಷಿ ಉಪಕರಣಗಳು, ತುಂತುರು ನೀರಾವರಿ ಘಟಕಗಳ ಅಳವಡಿಕೆಗೆ ಶೇ.50ರ ಸಹಾಯಧನವನ್ನು ನೀಡಲಾಗುತ್ತದೆ. ಇದಲ್ಲದೆ, ದೃಢೀಕೃತ ಬಿತ್ತನೆ ಬೀಜದ ಉತ್ಪಾದನೆಯನ್ನು ಪ್ರೋತ್ಸಾಹಿಸಲು ದ್ವಿದಳಧಾನ್ಯ ಬೆಳೆಗಳಲ್ಲಿ ಪ್ರತಿ ಕ್ವಿಂಟಾಲಿಗೆ ರೂ.5000/- ಮತ್ತು ಸಿರಿಧಾನ್ಯಗಳಿಗೆ ರೂ.3000/- ಪ್ರೋತ್ಸಾಹ ಧನ ನೀಡಲಾಗುತ್ತದೆ.

20) **ಮುಖ್ಯಮಂತ್ರಿಯವರ ಸೂಕ್ಷ್ಮ ನೀರಾವರಿ ಯೋಜನೆ:** ರಾಜ್ಯದಲ್ಲಿ ಲಭ್ಯವಿರುವ ನೀರನ್ನು ಸಮರ್ಥ ಮತ್ತು ಸಮರ್ಪಕ ಬಳಕೆಗೆ ಪ್ರೋತ್ಸಾಹಿಸಲು ಹಾಗೂ ಮಿತ ಬಳಕೆಯಿಂದ ಅಧಿಕ ಇಳುವರಿ ಪಡೆಯಲು ಹಾಗೂ ಸೂಕ್ಷ್ಮ (ಹನಿ/ತುಂತುರು) ನೀರಾವರಿ ಪದ್ಧತಿಯ ಅಳವಡಿಕೆಗೆ ಎಲ್ಲಾ ವರ್ಗದ ರೈತರಿಗೆ 2.0 ಹೆಕ್ಟೇರ್ ಪ್ರದೇಶದವರೆಗೆ ಶೇ.90 ರಷ್ಟು ಹಾಗೂ 2.0ಹೆಕ್ಟೇರಿಗಿಂತ ಮೇಲ್ಪಟ್ಟು 5.0ಹೆಕ್ಟೇರ್ ಪ್ರದೇಶದವರೆಗೆ ಶೇ.45ರ ಸಹಾಯಧನವನ್ನು ನೀಡಲಾಗುತ್ತಿದೆ.

21) **ರಾಷ್ಟ್ರೀಯ ಕೃಷಿ ವಿಕಾಸ ಯೋಜನೆ:** ಈ ಯೋಜನೆಯಡಿ ಕೃಷಿ ಮತ್ತು ಸಂಬಂಧಿಸಿದ ವಲಯಗಳಲ್ಲಿ ಹೆಚ್ಚಿನ ಸಾರ್ವಜನಿಕ ಹೂಡಿಕೆಗಾಗಿ ರಾಜ್ಯಗಳನ್ನು ಪ್ರೋತ್ಸಾಹಿಸಲಾಗುತ್ತದೆ. ಜಿಲ್ಲಾ ಕೃಷಿ ಯೋಜನೆಗಳಲ್ಲಿ ಸ್ಥಳೀಯ ಆದ್ಯತೆಗಳು / ಅವಶ್ಯಕತೆಗಳು/ ಬೆಳೆಗಳಿಗೆ ಹೆಚ್ಚಿನ ಪ್ರಾಮುಖ್ಯತೆಯನ್ನು ನೀಡಲು, ಹೊಸ ತಾಂತ್ರಿಕತೆಗಳನ್ನು ಅಳವಡಿಸಿ, ಮುಖ್ಯ ಬೆಳೆಗಳ ಉತ್ಪಾದಕತೆಯಲ್ಲಿ ಇರುವ ವ್ಯತ್ಯಯದ ಪ್ರಮಾಣವನ್ನು ಕಡಿತಗೊಳಿಸಲು, ಕೃಷಿ ಮತ್ತು ಸಂಬಂಧಿತ ವಲಯಗಳ ಎಲ್ಲಾ ಅವಶ್ಯಕತೆಗಳನ್ನು ತೆಗೆದುಕೊಂಡು ಉತ್ಪಾದನೆ/ ಉತ್ಪಾದಕತೆಯ ವಿವಿಧ ಘಟಕಗಳಲ್ಲಿ ಬದಲಾವಣೆ ತರಲು ಮತ್ತು ರೈತರಿಗೆ ಹೆಚ್ಚಿನ ಲಾಭಾಂಶ ದೊರಕಿಸಿಕೊಡಲು ಯೋಜನೆಯನ್ನು ಅನುಷ್ಠಾನಗೊಳಿಸಲಾಗುತ್ತದೆ. ಈ ಸಂಬಂಧ, ಕೃಷಿ ಮತ್ತು ಕೃಷಿ ಸಂಬಂಧಿತ ಇಲಾಖೆ/ ಸಂಸ್ಥೆಗಳಿಂದ ಕಾರ್ಯಕ್ರಮಗಳನ್ನು ಅನುಷ್ಠಾನ ಮಾಡಲಾಗುತ್ತದೆ.

22) **ಕೃಷಿ ವಿಸ್ತರಣೆ ಉಪ ಅಭಿಯಾನ:** ವಿಸ್ತರಣಾ ಸುಧಾರಣೆಗಳಿಗಾಗಿ ರಾಜ್ಯ ವಿಸ್ತರಣಾ ಕಾರ್ಯಕ್ರಮಗಳಿಗೆ ಬೆಂಬಲ ಯೋಜನೆಯು ವಿಸ್ತರಣಾ ಪದ್ಧತಿಯನ್ನು ರೈತರೇ ಮುನ್ನಡೆಸುವ ಹಾಗೂ ರೈತರಿಗೆ ಉತ್ತರದಾಯಿತ್ವವಾಗಬೇಕಾದ ಯೋಜನೆಯಾಗುವ ಗುರಿಯನ್ನು ಹೊಂದಿದೆ. ಭಾಗವಹಿಸುವಿಕೆ ಆಧಾರದ ಮೇಲೆ ವಿಸ್ತರಣಾ ಸುಧಾರಣೆಗಳನ್ನು ಜಾರಿಗೆ ತರಲು ಮತ್ತು ರೈತರಿಗೆ ತಂತ್ರಜ್ಞಾನವನ್ನು ಹೊಸ ಸಾಂಸ್ಥಿಕ ವ್ಯವಸ್ಥೆ ಮೂಲಕ ಪ್ರಸರಿಸುವ ಉದ್ದೇಶದಿಂದ ಜಿಲ್ಲಾ ಮಟ್ಟದಲ್ಲಿ ಕೃಷಿ ತಂತ್ರಜ್ಞಾನ ನಿರ್ವಹಣಾ ಸಂಸ್ಥೆ(ATMA)ಯನ್ನು ಅಸ್ತಿತ್ವಕ್ಕೆ ತರಲಾಗಿದೆ. ಈ ಯೋಜನೆಯಡಿಯಲ್ಲಿ ಭಾರತ ಸರ್ಕಾರ ನಿಗದಿಪಡಿಸಿರುವ ಮಾರ್ಗಸೂಚಿಯಂತೆ ಅಧಿಕಾರ/ ರೈತರ ತರಬೇತಿ, ಪರಿಚಯ ಪ್ರವಾಸ, ಪ್ರಾತ್ಯಕ್ಷಿಕೆ, ರೈತರ ಗುಂಪು ರಚನೆ, ಕೃಷಿ ಪಾಠಶಾಲೆ, ಕೃಷಿ ಮೇಳ, ಕ್ಷೇತ್ರೋತ್ಸವ ಇತ್ಯಾದಿ ಕಾರ್ಯಕ್ರಮಗಳನ್ನು ಅನುಷ್ಠಾನ ಮಾಡಲಾಗುತ್ತದೆ.

23) **ಕೃಷಿ ಯಾಂತ್ರೀಕರಣ ಉಪ ಅಭಿಯಾನ:** ಈ ಯೋಜನೆಯ ಉದ್ದೇಶ ಕೃಷಿ ಯಂತ್ರೋಪಕರಣಗಳ ಬಳಕೆಯಿಂದ ಸಾಗುವಳಿ ವಿಸ್ತೀರ್ಣದಲ್ಲಿ ಯಾಂತ್ರೀಕೃತ

ಶಕ್ತಿಯನ್ನು ಪ್ರತಿ ಹೆಕ್ಟೇರಿಗೆ 2.0ಕಿಲೋ ವ್ಯಾಟ್ ಗಳಷ್ಟು ಹೆಚ್ಚಿಸುವುದಾಗಿದೆ. ಇದರಡಿ ಕೃಷಿ ಯಂತ್ರೋಪಕರಣಗಳನ್ನು ಪಡೆಯಲು ಹಣಕಾಸಿನ ನೆರವು, ಬಾಡಿಗೆ ಆಧಾರಿತ ಸೇವಾ ಕೇಂದ್ರಗಳಿಗೆ, ಗ್ರಾಮ ಮಟ್ಟದ ಯಂತ್ರೋಪಕರಣಗಳ ಬ್ಯಾಂಕ್/ ಹೈಟೆಕ್ ಉಪಕರಣಗಳ ಹಬ್ ಗಾಗಿ ಹಣಕಾಸಿನ ನೆರವು ನೀಡಲಾಗುವುದು.

24) **ಬಿತ್ತನೆ ಬೀಜ ಉಪ ಅಭಿಯಾನ:** ಈ ಯೋಜನೆಯಡಿ ಸರ್ಕಾರಿ ಸ್ವಾಮ್ಯದ ಸಂಸ್ಥೆಗಳ ಮೂಲಕ ರಾಜ್ಯ ಬೀಜೋತ್ಪಾದನಾ ಕೇಂದ್ರಗಳ ಬಲವರ್ಧನೆ, ಬೀಜ ಪರೀಕ್ಷಾ ಪ್ರಯೋಗಾಲಯಗಳ ಬಲವರ್ಧನೆ, ಬೀಜ ಪ್ರಮಾಣನಾ ಸಂಸ್ಥೆಗಳಿಗೆ ಬೆಂಬಲ, ಬೀಜೋಪಚಾರ ಇತ್ಯಾದಿ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಲಾಗುವುದು. ಈ ಯೋಜನೆಯನ್ನು ಸರ್ಕಾರಿ ಸ್ವಾಮ್ಯ ಸಂಸ್ಥೆಗಳು/ ರಾಜ್ಯ ಕೃಷಿ/ತೋಟಗಾರಿಕೆ ವಿಶ್ವವಿದ್ಯಾನಿಲಯಗಳಿಂದ ಅನುಷ್ಠಾನಗೊಳಿಸಲಾಗುವುದು.

25) **ಮಳೆಯಾಶ್ರಿತ ಪ್ರದೇಶ ಅಭಿವೃದ್ಧಿ:** ಈ ಕಾರ್ಯಕ್ರಮದಡಿಯಲ್ಲಿ ಮಳೆಯಾಶ್ರಿತ ಪ್ರದೇಶದಲ್ಲಿ ರೈತರ ಕ್ಷೇತ್ರದಲ್ಲಿ ಸಮಗ್ರ ಕೃಷಿ ಪದ್ಧತಿಯನ್ನು ಪ್ರೋತ್ಸಾಹಿಸಲು ಬಹು ಬೆಳೆ ಪದ್ಧತಿ, ಅಂತರ ಬೆಳೆ, ಮಿಶ್ರಬೆಳೆ (ಏಕದಳ ಧಾನ್ಯ, ದ್ವಿದಳಧಾನ್ಯ ಮತ್ತು ಎಣ್ಣೆಕಾಳು ಆಧಾರಿತ) ಪದ್ಧತಿಗಳು, ತೋಟಗಾರಿಕೆ ಆಧಾರಿತ, ಪಶುಸಂಗೋಪನೆ ಆಧಾರಿತ, ಕೃಷಿ ಅರಣ್ಯ ಆಧಾರಿತ ಬೆಳೆ ಪದ್ಧತಿಗಳ ಅನುಷ್ಠಾನ, ಮಣ್ಣು ಮತ್ತು ನೀರು ಸಂರಕ್ಷಣಾ ಕ್ರಮಗಳು, ಮೌಲ್ಯವರ್ಧನೆ ಮತ್ತು ಸಂಪನ್ಮೂಲಗಳ ಸಂರಕ್ಷಣೆ ಮುಂತಾದ ಘಟಕಗಳನ್ನು ಅನುಷ್ಠಾನ ಮಾಡುವುದರ ಮೂಲಕ ರೈತರ ಆದಾಯವನ್ನು ಹೆಚ್ಚಿಸುವುದರ ಜೊತೆಗೆ ಬರ, ನೆರೆ ಮತ್ತು ಇತರೆ ಹವಾಮಾನ್ಯ ವೈಪರೀತ್ಯಗಳನ್ನು ಎದುರಿಸಲು ಸಜ್ಜುಗೊಳಿಸಲಾಗುತ್ತದೆ. ಇದರಡಿ ಸಮಗ್ರ ಕೃಷಿ ಪದ್ಧತಿ ಅಳವಡಿಕೆಗೆ ಅವಶ್ಯವಿರುವ ಪರಿಕರಗಳು ಇತ್ಯಾದಿಗಳಿಗೆ ಶೇ.50ರ ಸಹಾಯಧನವನ್ನು ನೀಡಲಾಗುವುದು.

26) **ಪ್ರಧಾನ ಮಂತ್ರಿ ಕಿಸಾನ್ ಸಮ್ಮಾನ್ ನಿಧಿ ಯೋಜನೆ:** ಭಾರತ ಸರ್ಕಾರದ ಪ್ರಧಾನ ಮಂತ್ರಿ ಕಿಸಾನ್ ಸಮ್ಮಾನ್ ನಿಧಿ ಯೋಜನೆಯಡಿ ಸಾಗುವಳಿ ಭೂಮಿ ಹೊಂದಿರುವ ಎಲ್ಲಾ ಅರ್ಹ ರೈತರಿಗೆ ವಾರ್ಷಿಕರೂ. **6000/-**ಗಳ ನಗದನ್ನು ರೂ.**2000/-**ಗಳಂತೆ ಮೂರು ಕಂತುಗಳಲ್ಲಿ ನಾಲ್ಕು ತಿಂಗಳಿಗೊಮ್ಮೆ ನೀಡಲಾಗುವುದು.